ನಾಳನು ಹೀಗೆ ಬರುತ್ತಿರಲು, ಕುಣಿಕುಣಿದಾಡುತ್ತಿರಲು, ದೇಹವು ಹೊತ್ತ ಹೊರೆಯಿಂದ ಬಳುಕು ವದು. 'ಕೆರುಹಿನ ಹೊರೆಯುವನು' ಬದುಕಿದನು ಎನ್ನುತ್ತ ಬಂದಂ:

'ನೋಡಲ್ಬನನವನಿಳಿವುವ ತೆರದಿಂ
ಮೂಡೆಯುನಿಳಿವುತೆ ಶರ್ವನ ಬೆಸದಿಂ'

ಇತ್ತ ಗಿರಿಜೇಶನು ಕೊಂಡದೊಳಗೆ ಮುಳುಗಿಸಿ ಕರೆತನ್ನಿ ಎನ್ನಲು, ನಂದೀಶನು ಹಾಗೆ ಮಾಡೇ

'ಕುಲವಳಿದುದು ಕುಲನಾಮುವದಿರ್ದುದು । ತೊಲಗಿತು ತನು ನಿಜ ಜೀವಮುದಿರ್ದುದು'
'ತಿರುನಾಳಾಗುತೆ ಹರನಾಳಾದಂ । ಹರನಾಳಾಗುತೆ ತಿರುನಾಳಾದಂ'

ಎಂದು ಶಿವನೇ ಮುದ್ದಾಡಿ ಹರಸುವನು. ಇದೊಂದು ಸೊಗಸಾದ ವಿಚಿತ್ರ.

೪. 'ಒಂದು ಪದಂ ಪಾತಳವನೊತ್ತಲ್ | ಒಂದು ಪದಂ ಬ್ರಹ್ಮಾಂಡವನೆತ್ತಲ್'— ನಿತ್ಯ ರಂಜಿಸುವ ಶಿವಮೂರ್ತಿಯು, ಕುಂಬಾರ ಗುಂಡಯ್ಯನನ್ನು ತನ್ನ ಕಾಯಕದಲ್ಲಿ ಪ್ರೇರೇಪಿಸು ತ್ತದೆ. ತನ್ನ ಶಿವಾರ್ಪಿತ ಕಸುಬಿನಲ್ಲಿ ಮಗ್ನನಾದರೂ ಶಿವಪೂಜೆಯನ್ನು ಬಿಡಲಿಲ್ಲ ಗುಂಡಯ್ಯ; ತನ್ನ ಕಾಯಕದಲ್ಲಿಯೇ ವಿಶ್ವರೂಪಿ ನಟರಾಜನ ಲೀಲಾ ಲಾವಣ್ಯವನ್ನು ಕಂಡು ಆನಂದಿಸಿ ಸಾರ್ಥಕನಾಗಬೇಕೆಂದು ಬಯಸಿದನು—ಆ ಬಯಕೆಯನ್ನು ಬಹು ರಮ್ಯವಾಗಿಯೂ ಅತ್ಯುಜ್ವಲ ವಾಗಿಯೂ, ಈಡೇರಿಸಿಕೊಂಡ: ತಾನು ಮಡಕೆ ತಟ್ಟುವ ತಾಳಕ್ಕೆ ಸರಿಯಾಗಿ ಶಿವನು ಕುಣಿ ದಾಡುವಂತೆ ಮಾಡಿದನು: ಇದು ಅವನ ಸಿದ್ಧಿ. ರೀತಿಯೊ ಹೀಗೆ: 'ಮೇಧೆಯೆ ಚಕ್ರದ ಮೊಳೆ' 'ಸೊಗಯಿಪ ನಾಭಿಯೆ ನಾಭಿ,' 'ಕನಸಿನ ಕಾಯಂ ಮೃತ್ತಿಕೆ' 'ನೆನಹಂ ಚಟಿದಾರಂಗಳ್' 'ನಿಶ್ಚಯೆ ತಿರುಹುವ ದಂಡ'—'ಮುಟ್ಟಿ ತಿರುಗುವುದು ಜೀವವದಾಗಿರೆ' ........ 'ಮನದೊಳ್ ಕಣ್ಗೊಳ್ ಪೂಜಾಭಾವಂ' ಹರಿದಾಡುತ್ತಿರೆ, ಶಿವನು ಒಲಿಯದಿರುವನೇ? ಮಡಿಗೆಯ ದನಿಗೆ ಶಿವಲಾಸ್ಯವನ್ನು ಬರಮಾಡಿಕೊಂಡ; 'ನೆನೆದಂದದಿ ಮಡಿಕೆಗಳಾಗುತ್ತಿರೆ' 'ಮನದಂದದಿ ಶಿವನೊಳ ಗಾಡುತ್ತಿರೆ' ನೃತ್ಯದ ನೆಲೆಯನ್ನೂ, ಚೆಲುವನ್ನೂ, ಮೇಲ್ಮೆಯನ್ನೂ ಕಂಡುಕೊಂಡ ಮಡಕೆಗಳಂ ಬಾರಿಸಿ, ತೂಗಾಡಿ, ಸುಖದೊಳ್ ಮುಳುಗಾಡಿದನು; ಲೋಲಾಡಿದನು. ಅತ್ತ ನಟರಾಜನು 'ಮಡಕೆಯ ಶಬ್ದಕ್ಕಾಡುತ್ತಿರ್ದಂ;' ಒಬ್ಬರಿಗೊಬ್ಬರನ್ನು ನೋಡಿ ಪುಳುಕವೇರಿ, ನಾದಹೊಮ್ಮಿ ಕುಣಿಯುತ್ತಿರಲು — ಗಿರಿಜೆ ಗಾಬರಿಯಾಗುವಳು: 'ಈಶನ ಪರಿ ಮೀರಿದೊಡೆ ಕೆಡಲಾಗದೇ ನರಲೋಕವು' ಎನ್ನುತ್ತ ಬೇಡಿ ಸಮತೆಗೆ ತರುವಳು. ಅಂತು ಶೈಲಜೆಯಿಚ್ಛೆ ಪೂರೈಸಿತು. ಹೊಸ ಹೂಮಳೆ ಸೂಸಲು, ಗುಂಡಯ್ಯನನ್ನು ಕಣ್ಣಾ ಹನಿ ತುಂಬಿ ನೋಡಿ, ಬಿಗಿದಪ್ಪಿ, ಗಗನ ತಳಕ್ಕೆ ನೆಗೆಯುವನು ಶಿವನು.

ಈ ರಗಳೆಯನ್ನು ಓದಿ ಕುಣಿದಾಡಿಯೇ ಆನಂದಿಸಬೇಕು.

೮

೧. ಕಾಂಚಿಪುರದ ತಿರುಕುರುಂಪೆ ತೊಂಡರೆಂಬ ಭಕ್ತನು ಕಾಯಕದಿಂದ ಅಗಸನು.

'ಪಾಪವೆಂಬ ಮಲಿನ ಮನದ ಸೀರೆಯುಂ ತೆರಳ್ಚಿಕಟ್ಟಿ
ಕೋಪಮೆಂಬ ಕತ್ತೆ ನಿಲಲು ಬೆನ್ನ ಮೇಲೆ ಮಾಣದೊಟ್ಟಿ
ನಡೆದು ಭವನ ಭಕ್ತಿರಸದ ಹೊಳೆಯ ತಡೆಯ ಬಳಿಗೆ ಬಂದು
ಮೃಡನೆ ಶರಣೆನುತ್ತ ದೇಹವೆಂಬ ಕಲ್ಲಬಳಿಗೆ ಬಂದು'

ಒಗೆದನೊಗೆದನು; 'ಭಕ್ತಿರಸದೊಳಗೆದ'— 'ದೇಹ ಭಾವವಳಿದು ಸುಖದೊಳಗೆವ' ತಾಪತ್ರಯ ಗಳೆಂಬ ಕಿಚ್ಚಿನಿಂದ ಶುದ್ಧ ವಸ್ತ್ರಗಳು; ಕಂಥೆ ಕರ್ಪ್ರನಾದರೂ ಶಿವನ ಚಿತ್ತವಲ್ಲಿ ಬಿಳಿದಾಯ್ತು;

'ತೆಗೆಯಲಿಲ್ಲ ತಿರುಹಲಿಲ್ಲ ಮುರಹಲಿಲ್ಲ ಮಳಿಗಳೊಳಗೆ,
ಬಗೆಯಲಿಲ್ಲ ಹಿಂಡಲಿಲ್ಲ ತೊಳೆಯಲಿಲ್ಲ ಮಳಿಗಳೊಳಗೆ—'

"ಹಿಂದೆಯೊಗೆದ ಸೀರೆಯೊಟ್ಟಲಿಂದೆ ಘನವ ಕಂಡೆ ದೇವ" ಎಂದು ನಚ್ಚಿ ಒಗೆಯುತ್ತ ಬರುವನು. 'ಕಂಥೆ ಕಾಳದಂತೆ ನೀಲದಂತೆ' ಕರ್ಪ್ರನಾದರೂ 'ಬಳಿದು ಹಾರೆ ಕರಿಮ ತೋರಿದರೂ' ಮಸಿಯ ಬಣ್ಣವೇರಿದರೂ, ಆವನೆದೆ ಜಗ್ಗದು; ಕುಗ್ಗದು. ಬಿಚ್ಚಿನೋಡಿ ಮತ್ತೆ ಒಗೆಮ, ನಮಃ ಶಿವಾಯವೆಂದು ಚಿಂತಿಸುವನು. ಈ ಬಟ್ಟೆಯ ಮಹಾತ್ಮನೆಂಥವನೊ, ಎಂದು ನೊಂದರೂ ನಿಷ್ಠೆ ನೆತ್ತಿಗೇರಿ, ತನ್ನ ತನುವನ್ನೆ ಒಗೆದುಕೊಳ್ಳುವನು. ಇಷ್ಟಾದಮೇಲೆ ಶಿವನು ಕಣ್ಣೆತ್ತಿ ನೋಡಿ ಹರಸುವನು.

ಎಷ್ಟು ಒಗೆದರೂ ಸೀರೆಯ ರಾಶಿ ಸವೆಯದ್ದನ್ನು ನೆನೆದರೆ, ಎಷ್ಟು ಒದ್ದಾಡಿದರೂ ಬಟ್ಟೆ ಬೆಳ್ಳಗಾಗದೆ ಹೋದದ್ದು ವಿಚಾರಿಸಿದರೆ, ಎಂಥ ಭವಿಯ ಮನಸ್ಸಿನಲ್ಲಿಯೂ ಉಲ್ಲಾಸ ಉಳಿಯದು. ಈ ನಿಶ್ಚಲ ಅಗಸನು ಧನ್ಯನು — ವಂದ್ಯನು.

೨. ತಿಣ್ಣಮಂಗಳವೆಂಬೂರಲ್ಲಿ ಅರಿವಾಳ್ತಾಂಡರರೆಂಬ ಶರಣನು ಕೂಲಿಯ ಕಾಯಕ ದಿಂದ ಪಾಡುಗೈಯುತ್ತಿದ್ದನು. 'ಕೂಲಿಯಿಂದಾದ ಓಗರದ ನೆಲ್ಲಕ್ಕಿಯಂ| ಮೇಲೆನಿಸಿ ಬೆಳೆದ ಮಾವದು ಕೊಯ್ದುರೆರೆಯಂ| ತಂದು ನಲವಿಂದ ಶಿವನಾರೋಗಣೆಗೆ ಕೊಟ್ಟು' ಸಂತಸಪಡುತ್ತಿದ್ದನು. ಈ ಒಕ್ಕಲ ಮಗನ ಭಕ್ತಿಗೂ ಕಂಟಕವು ಬಂದದರಿತು. ಒನ್ಮೆಲೆ ಬಿರುಗಾಳಿಯೆದ್ದು, ಕಾಳನ್ನು ತೂರಿ ಬೀಸಿ ಚಲ್ಲಾಡಿತ್ತು; ಕಣ್ಮುಚ್ಚುವ ಧೂಳಿ ಧೂಸರ. ಈತ ಉಪವಾಸಿ ಬೇರೆ. ಆದರೂ ಡೆಂಡಣಿಸಿ ಬರುವಾಗ ಕಾತರನಾಗುವನು—ಎರೆಯ ಬಿಂಟಿಗೆಡಹಿ ಬೀಳುವನು. ಕೈಲಿದ್ದ ಅಕ್ಕಿಯನ್ನು ಚೆಲ್ಲಿಕೊಂಡು ಮರುಗುವನು — ಶಿವ ದ್ರೋಹಕ್ಕಾಗಿ:

'ಅಯ್ಯೊ ಶಿವನ ಬಾಯ ತುತ್ತ ಎಂತೊಕ್ಕೆನೇ
ಎಂದು ಮಿಂತಾಗದಿಂದೇಕಿಂತುಂಟಾಮದೋ'

ಎಂದು ಗೋಳಾಡುತ್ತಿರಲು ಮಹಾದೇವನು ಪ್ರಸನ್ನನಾಗಿ 'ಸಾಕಿನ್ನು ಬಿಡು' ಎನ್ನುತ್ತ ತಲೆದಡಹಿ ಕೈವಿಡಿದು ಕೊಂಡಾಡುವನು. ಇಷ್ಟಕ್ಕೆ ನಮ್ಮ ಭಕ್ತನ ಮನಸ್ಸು ತಣಿಯದು;

'ಅರಯ್ಯ ನಾಂ ತಂದ ಕೇರೆಯುಂ ಎಲೆ ದೇವ
ನೀವುಂಡೊಡಷ್ಟೆಯಾದೊಡೆ ಬಂದಪೆಂ ದೇವ'

ಎನ್ನುವನು. ಶಿವನನ್ನು ಉಣ್ಣಿಸಿದ ಬಳಿಕವೇ ಅವನ ಬೆನ್ನು ಹತ್ತಿ ಕೈಲಾಸಪುರಕೆ ಹೋಗಲು ಒಪ್ಪುವನು. ಇವನ 'ಓಗರದ ಕುಡುಗೋಲು' ಅಂದಿನಿಂದ ಅಲ್ಲಿ ಅಲಂಕರಿಸಲ್ಪಟ್ಟಿತು. ಇಂಥ ಒಕ್ಕಲುಮಗನ ನಿಷ್ಠೆಗೆ ಯಾವುದು ಸಮ? ಆದರೆ ಅವನ 'ಸಂಸರದ ಬೇಗೆ' ಕುಡುಗೋಲು ಬಿದ್ದಂತಾಯಿತಲ್ಲವೇ?

"—ನಡೆ ಮಗನೆ........... ತಡೆಯದೇರ್ರೆ ....... !!"

೩. ಓಹಿಲಯ್ಯನು ಶರೀರಧಾರಿಯಾಗೆ ಕೈಲಾಸಕ್ಕೆ ಹೋದರೆ, ಹಲಾಯುಧನು 'ಒಂಭತ್ತು ಪುರವರ್ಗ ಸಹಿತ ಬಂದು, ಅಂಬರದ ಬಟ್ಟೆಯೊಳ್' ನಂಬಿ ಬಂದವನಾದನು.

ಓಹಿಲನ ಸಂಗತಿಯು ಉದ್ಭಟ ರಾಜನೂ, ಅವನ 'ಭಾವದ ಬಳಿಕೆಯ ಬೆಳೆಸೆನಿರ್ಪ ವಲ್ಲಭೆಯೂ' ನೆತ್ತವಾಡುವಾಗ ವಿನೋದಕ್ಕಾಸ್ಪದವಾಗಿ ಚರ್ಚೆಗೆ ಬರುವುದು. ತನ್ನ ಕಾಂತೆಗೆ ರಾಜನು, ಇದಾವ ಹೆಚ್ಚಿನ ಕೆಲಸ — ನಾನು ಪುರಸಹಿತ ಹೋಗುವೆನು ಎಂದು ಪಣ ತೊಡುವನು. ಅದರಂತೆಯೆ — 'ಕೊಂಡೊಯ್ವಂ ಕೊಂಡೊಯ್ವಂ ಈ ಭಕ್ತಾಗ್ರಣಿ. ಈ ವಸ್ತುವೇ ಸೋಮ ರಾಜನ ಉದ್ಭಟ ಕಾವ್ಯದಲ್ಲಿ ನಿರೂಪಿತವಾಗಿದೆ.

ಓಹಿಲನ ಭಕ್ತಿಕಥೆ ಇನ್ನೊಂದು ರಗಳೆಯಲ್ಲಿ ಬೇರೆ ರೀತಿಯಲ್ಲಿ ಚಿತ್ತಾಕರ್ಷಕವಾಗಿದೆ. ಗುಜ್ಜರ ದೇಶದ ಓಹಿಲನಿಗೆ ಸೋಮನಾಥ ಗುಡಿಯ ಕದವನ್ನು ತೆಗೆಯಲು ಅಲ್ಲಿಯ ಪೂಜಾರಿಗಳು ನಿರಾಕರಿಸುವರು. ಅದೇ ದಿನ ಶಿವನು ಕನಸಿನಲ್ಲಿ ಹೋಗಿ ಎಚ್ಚರಿಸಲು ಓಹಿಲನಿಗೆ ಪ್ರವೇಶವಾಯಿತು. — "ಓಹಿಲ ದೇವನೊಳಪೊಕ್ಕು ಜೀವಂ ಬಂದಂತೆ ಪರಿತಂದು ಸೋಮನಾಥನಂ ತೆಗೆದಪ್ಪಿ ಬಿಗಿದಪ್ಪಿಯುಮರ್ದಪ್ಪಿ ಸೋಂಕಿನೊಳಪ್ಪಿ ಮೆಯ್ಯೊಳಪ್ಪಿ ಕಣ್ಣೊಳಪ್ಪಿ ಮನದೊಳಪ್ಪಿ ಚಿತ್ತದೊಳಪ್ಪಿ ತಣಿವಿಡಿದು, ಸುಖಂಬಡೆದು ಕಂಡುಕಂಡು, ಶಿವ ಮರುಳ್ಗೊಂಡು, ಆಲಿಂಗನಮಂ ಸಡಿಲ್ಚಿ, ಪುಳಕವೆಳ್ದು ಹೊಮ್ಮಿ ಹೊರಳ್ದು, ಜುಮ್ಮನೆ ಬೆಮರ್ತು ಕೊರ್ಬಿ, ಕೊನರ್ತು ಉಬ್ಬಿ ಯುರುಳ್ದುಬ್ಬರಿಸುತಿರ್ಪ" ಓಹಿಲಯನು ದಿವ್ಯ ಪೂಜೆಯ ದಿವ್ಯ ಶರಣ. ಆದರೂ ಈತನಿಗೆ ವಿಚಿತ್ರ ವರವಾಯ್ತು: "ಹನ್ನೆರಡು ಬರಿಸಂ ಹಿಗ್ಗಿ ಪೊರೆಯೇರಿ ಗುಗ್ಗುಳಮಂ ತಂದೆಮಗಿಕ್ಕೆ ಸಗ್ಗವವರು ಬೆರಗಾಗೆ, ಶರೀರಂ ಬೆರಸು ಕೊಂಡಯ್ದಪೆವೆನೆ' ಹೊಂಗಿ ಹೊರೆಯೇರಿ ನೋಡಿ ನಲವೇರಿ ಹಿಗ್ಗಿ ಹರುಷಂಪಳೆವೋಹಿಲಯ್ಯಂ" ಈ ಸಾಹಸ ನಿಧಿಗೆ ಬಂತು ಪರೀಕ್ಷಾ ಕಾಲವು. ದಿನದಿನವೂ ಧೂಪದಾರತಿ: "ಪಾತ್ರೆಯಂ ತಂದು ಮುಂದಿರಿಸಿ ಸಿಡಿಲ ಕಿಡಿಯಂತಿರ್ಪ ಕೆಂಡಗಳಂ ಕುಪ್ಪಳಿಸಿ, ಗುಗ್ಗಳವಂ ಮೇಲೆ ತಂದು ಸುರಿಯೆ, ಗಳಗಳ ನರಳ್ದು ಚಿಮಿಚಿಮಿಸಿ ಕಾಯ್ದು ಧೂಪರ ಸವಿಯ ಹೊಗೆಯನುಗುಳೆ ಬೀಸುವಾಗಳುಂ ಅವ್ಯುತರಸದ ತುಂತುರು ತೆರಳ್ದಂತೆ ಧೂಪ ಪತ್ತಿ ಕಂಪುತೆರೆ ಮುಸಗಿ ತೀಡುತ್ತೆ ಪರಿಮಳದ ಮುಂಜು ಕವಿವಂತೆ ಸವಿಯ ತುಷಾರವನೊತ್ತುವಂತೆ ಧೂಪದ ಸವಿಯು ಸರ್ವಾಂಗವುಂ ಪುಗೆ, ಲೇಸಿಂಗೆ ಲೇಸನರಸಿ ತಂದಿಕ್ಕುವ ಧೂಪದ ಸೊಗಸಿನ ಸೊಕ್ಕು ಸವಿಯ ಸಾಲಿಡೆ" — ಓಹಿಲನಿಗೆ ಧೂಪದೋಹಿಲನೆಂಬ ಹೆಸರು ಜಗದಗಲ ಹಬ್ಬಿತು. ಇದೇ ಪ್ರಕಾರ ಹನ್ನೆರಡು ವರುಷ ಈ ಭಕ್ತನು ಎಲ್ಲೆಲ್ಲಿಯ ಗುಗ್ಗಳವನ್ನು ತಂದರ್ಪಿಸುತ್ತ ಬಂದನು. 'ದುಮ್ಮಳಂ ಒರ್ಮೆ ಕವಿದು ದುಮ್ಮಾನಂ ಕಾಹೇರಿ ಆಪತ್ತೆಡೆಗೊಂಡು ಮೆಯ್ಗುಂದಿ ಮನಂ ತಾರಿ ಬುದ್ಧಿಕಾವುಳಂ ಮುಸಗಿ, ಚಿತ್ತಂ ಕೊರೆದು ಜೀವಂ ಬೆಂದು' ಹೋದರೂ ಶಿವಧೋ ಎನ್ನುತ್ತ 'ಕಣ್ಣೊಳು ಹರಣಂ ಕಯ್ಯೊಳು ಕಾಯವಾಗಿರ್ದನು.'

"ಬಾಳ್ಗಿನ್ನ ಸೋಮಯ್ಯ ತಂದೆ ಎನುತೆತ್ತಿದಂ
ಧೂಪವುಂ ಪೊತ್ತು ಜನನದ ಹೊರೆಯನಿಳುಪಿದಂ
ಧೂಪಮಂ ಹೆಗಲಗೇರಿಸಿ ಸಾವನಿಳುಪಿದಂ"

ದಿನದಿನವೂ ಕಂಬಿಯ ಮೇಲಿಂದ ಹೊತ್ತು ತಂದು ತಂದು ಕಾಯವು ಕುಸಿದು ತಗ್ಗಿತು; ಹೆಗಲೆಲವು ನೆರೆಮುಕ್ಕಾಯಿತು; ಹಜ್ಜೆ ಹುಣ್ಣು ಹುಣ್ಣಾಯಿತು. ಅಂಗಾಲದಲ್ಲಿ ಉರಿಯೆದ್ದು ಬೊಕ್ಕೆ ಹುಟ್ಟಿ ನೆತ್ತರುಗುಳಿತು. ಸರ್ವ ತ್ರಾಣವೂ ಜಗುಳಿತು. ತನು ಜರ್ಝರಿತವಾಯಿತು.

"ಮನವೆ ಕೈಕಾಲಾಗಿ ನಡೆವುತಿರ್ದಂ ನೋಡ" — ಏನನ್ನೂ ಲೆಕ್ಕಿಸದೆ ಕಾದುರಿಗೆ ಧೂಪವಿಕ್ಕಿ ಕೆಂಡವಂ ಸುರಿದು ಕುಣಿಕುಣಿದಾಡಿ ಮಣಿದಾಡಿ ತಣಿದನು.

ಇಂಥ ನೋಂಪಿ, ಈ ಅಚಲ ನಿಷ್ಠೆ ಇನ್ನೆಲ್ಲಿ ಸಿಕ್ಕೀತು?

ಕೊನೆಯಲ್ಲಿ 'ಮೊಳಕೆಯ್ಯುಮಂ ತೆಯ್ದು ಬಾವನ್ನಮಂ ನೆರೆವುತಿರ್ಪ'ಂತೆ ಮಾಡಿ, ಮೆರೆದ ಒಲಘಾಂಡ ಮೂರ್ತಿಯನ್ನೂ ನೆನೆಯಬಹುದು. ಶಿವನ ಬಯಕೆಯಂತೆ 'ಹಸೆಯ ಮೇಗಣ ಮಗಳ ಮುಡಿಯುಸಿತ್ತ', 'ಎನಗವರೆ ಲಾಭವವರ್ಗನೆ ಲಾಭಂ ಕೇಳ್' — ಎಂದು ಸಾರುವ ಮಾನಕಂಜರನು ಅದ್ವಿತೀಯನಾಗಿದ್ದಾನೆ. ರೇವಣಸಿದ್ಧ ಶಂಕರ ದಾಸಿಮಯ್ಯ ಮೊದಲಾದ ಹಿರಿ ಶರಣರಿಗಿಂತ ಈ ಸಾಮಾನ್ಯ ಶರಣರು ಹರೀಶ್ವರನ ಕೈವಾಡದಲ್ಲಿ ಹೆಚ್ಚು ಮಿಗಿಲಾಗಿ, ಹೆಚ್ಚು ಹೃದಯವೇಧಕ ಮೂರ್ತಿಗಳಾಗಿ ಬೆಳಗಿದ್ದಾರೆ. ಕೂಡಲು ಸಂಗನು ಚನ್ನಯ್ಯನ ಮನೆಯಲ್ಲಿ ಉಂಡದ್ದಾಗಲಿ, 'ಕೂತು ಮಾದರಚೆನ್ನನೊಡನುಂಡೆವೆಲೆ ಚೋಳ' ಎನ್ನುವ ಶಿವನ ಪ್ರೇಮದ ಕಾಣಿಕೆಯಾಗಲಿ ಭಕ್ತಿಕಾಂಡದ ಚರಿತ್ರೆಯಲ್ಲಿ ಅಚ್ಚೊತ್ತಿ ನಿಲ್ಲಬೇಕಾದದ್ದೆ. 'ನಾಮರಸದೊಳಿಂತು ಪ್ರೇಮರಸ'ವನ್ನು ಹರಿಯಿಸಿ ಲೋಕಕ್ಕೆಲ್ಲ ಪೂಜ್ಯ ಕವಿಯಾದನು.

ಕವಿಯ ಚಿತ್ತವೂ ನೆನಹೂ ಮನಸ್ಸೂ— ನುಡಿವುದೂ ಕರೆವುದೂ ನಡೆವುದೂ—ನೆಲದ ಮೇಲಿರಲಿ, ಭಾವಿಕರ ಬಗೆಯೊಳಗಿರಲಿ — ಒಂದು ನಿಚ್ಚ ಸತ್ಯದ ನೆಲಗಟ್ಟಿನ ಮೇಲೆ ನಿಂತಿದೆ. ಭಕ್ತಿಯ ರಸ ನುಡಿಯಿರಲಿ—ಬಿರುನುಡಿಯಿರಲಿ—ಶಾಂತಿವೆನ್ನಿ—ಉಗ್ರವೆನ್ನಿ—ರೂಪಕವೆನ್ನಿ—ಉತ್ಪ್ರೇಕ್ಷೆಯೆನ್ನಿ-ಎಲ್ಲವೂ ಮಂಗಳ ಮನೋರಥದ ಹಾಸುಹೊಕ್ಕಾಗಿ ಹರಿದಾಡುತ್ತಿದೆ; ನೆಗೆದಾಡುತ್ತಿದೆ. ಒಟ್ಟಿಗೆ ಮಾಯೆ ಛಾಯೆಗಳನ್ನು ಬೀಸಾಡಿದ್ದಾನೆ; ತಿಳಿವು ವಿರಕ್ತಿಗಳಿಗೆ ಧೂಪದಾರತಿ ಬೆಳಗಿದ್ದಾನೆ. ಪರವಸ್ತುವಿನ ಕಣ್ಣಬೆಳಕು — ನೇಸರನನ್ನು ಕೂಡಿಕೊಂಡೆ ಎಷ್ಟು ಬಗೆಯ ಕಿರಣಗಳಲ್ಲಿ ಹರಿದಾಡಬಲ್ಲದೆಂಬುದುವನ್ನು ನಮಗೆ ಅರುಹಿದ್ದಾನೆ. ಸಾಕಿಷ್ಟು.

---